# ನಟರಾಜಭಕ್ತ ನಂದಹೊಲೆಯ

———:———

(ಸಾಂಗತ್ಯ)

ನೆನೆವೆ ಶ್ರೀಶಿವನ ಚರಣಚರಿತ್ರೆಯ
ನೆನೆವೆ ಶ್ರೀಶಿವನ ಪಾದವನೂ
ನೆನೆವೆ ಶ್ರೀಶಿವನ ಲೀಲೆನಾಟ್ಯಂಗಳ
ನೆನೆದು ಶ್ರೀಶಿವನ ಪಾಡುವೆನು ॥ ೧ ॥

ಸರ್ಪಭೂಷಣ ಶಿವಕಪ್ಪರಪಿಡಿದು
ಒಪ್ಪೊಪ್ಪೊ ಜೋಗಿಯಂದದಲಿ
ಮುಪ್ಪುರಚರಿಸುತ್ತ ಮುನಿಗಳೆಲ್ಲರಕಾಯ್ವ
ವಸ್ತುಮೂರುತಿಯೆ ಪಾಲಿಸಲಿ ॥ ೨ ॥

ಹರಿವನದಿಯ ತನ್ನ ಶಿರದಲ್ಲಿ ಧರಿಸುತ್ತ
ಕರಿಯಚರ್ಮವ ಹೊದಿಯುತಲೆ
ನಿರುತವು ಮಸಣದಿ ವಾಸವಾಗಿರುವಂಥ
ಪುರವೈರಿ ಸಲಹಬೇಕೆನ್ನ ॥ ೩ ॥

ಕುಂಭ ಸಂಭವನ ಶಿಷ್ಯನೆಂದೆನಿಸಿದ
ವಿಂಧ್ಯ ಪರ್ವತದ ದಕ್ಷಿಣದಿ
ಸಂದೇಹವಿಲ್ಲದೆ ಮೆರೆಯುತ್ತಲಿರುವುದು
ಒಂದುಪಳ್ಳಿಯು ಆದನೂರು ॥ ೪ ॥

ಸುತ್ತಲು ಬೇಲಿಯು ಎತ್ತಲು ಕುರಿಕೋಳಿ
ಸುತ್ತುವ ನಾಯಿಯ ಕೂಗು
ಚಿತ್ತವನಳುಕಿಸಿ ಮುಚ್ಚಿಸಿಮೂಗನು
ಒಪ್ಪುವದೊಂದು ಹೊಲಗೇರಿ ॥ ೫ ॥

ಮೀನು ಏಡಿಗಳಿಂದ ಕೂಡುತನಾರುವ
ಮೀರಿದ ಕೆಸರ ಗುಂಡಿಯಲಿ
ತೋರುವ. ತಾವರೆಯಂದದಿ ನಂದ ಮೈ
ದೋರಿದನಾ ಹೊಲೆಯರಲಿ ॥ ೬ ॥

ವಶವೆಲ್ಲವೆನುತಾಲೆ ಶಿಶುತನ ಕಳೆದನು
ಅಸಮಭಕ್ತನು ನಂದಹೊಲೆಯ
ಎಸೆದಾವು ಬಾಲ್ಯದ ಹಸುಳೆಯಾಟಗಳಲ್ಲ
ಅಸಮಲೋಚನನ ಕಿಂಕರಗೆ ॥ ೭ ॥

ಸರಿಯಬಾಲಕರೊಡನೆ ಪರಶಿವನೆನ್ನುವ
ಹರಹರನೆಂದು ಪಾಡುವನು
ಪರಿಪರಿತಿಂಡಿಯ ಮುಂದಿಡೆ ಮನದಲಿ
ಪುರಹರಗೆಂದು ತಿನ್ನುವನು ॥ ೮ ॥

ಜೇಡಿಮಣ್ಣನುತಂದು ಮಾಡುವ ಶಿವನೆಂದು
ಕಾಡುಪುಷ್ಪಗಳ ಪೂಜಿಸುವ
ರೂಢಿಯೊಳಗೆ ಮೈನೀಡುವ ಕೈಯನು
ಜೋಡಿಸಿ ಮುಗಿದು ಪಾಡುವನು ॥ ೯ ॥

ತನ್ನ ಸಂಗಡಿಗರಿಗೆಲ್ಲ ಬೋಧಿಸುವನು
ಚಿನ್ಮಯಾತ್ಮಕ ಶಿವನೆಂದು
ಅನ್ಯವನರಿಯಾದೆ ಪರಶಿವ ಮಯವೆಂದು
ತನ್ನ ಚಿತ್ತದಲಿ ಭಾವಿಪನು ॥ ೧೦ ॥

ಆ ಹಳ್ಳಿಯೊಳಗೊಂದು ಹರನ ದೇವಾಲಯ
ತೋರುವುದತಿರಮ್ಯವಾಗಿ
ದೂರದಿಂದಲೆ ನಂದನೋಡುತ್ತ ನುತಿಸುವ
ಮೀರಿದ ಸಂತೋಷದಿಂದ ॥ ೧೧ ॥

ಭೇರಿಮೃದಂಗವು ಭೋರೆಂಬ ವಾದ್ಯವು
ಪೌರಜನರ ಭಜನೆಗಳು
ಸಾರುತ್ತೈತರುತಿಹ ಹರನ ಮೂರ್ತಿಯನೋಡಿ
ಪಾರವಶ್ಯದಿ ಕುಣಿಯುವನು ॥ ೧೨ ॥

ಎಡೆಗೆಡೆಗೊಮ್ಮೆ ಪರಶಿವನೆನ್ನುವ
ಬಿಡದೆ ಮೂರ್ತಿಯನು ಧ್ಯಾನಿಪನು
ತಡೆಯಿತೆನಗೆ ಈ ಹೊಲೆಜನ್ಮವೆನುತಾಲಿ
ಬಿಡದೆಯೆ ಮರುಗುತ್ತಲಿಹನು ॥ ೧೩ ॥

ದೇವನ ಬಳಿಯಲಿ ಭಾವಶುದ್ಧಿಲಿಗೈವ
ವೇದಘೋಷವ ಕೇಳುತಲಿ
ದೇಹ ಭಾವವ ಮರೆತು ತನ್ಮಯನಾಗುತ್ತ
ಆನಂದಪಡುತಿಹ ನಂದ ॥ ೧೪ ॥

ಮಾರಹರನೆ ನಿನ್ನ ಪಾವನಮೂರ್ತಿಯ
ಆವರೀತಿಯಲಿ ನೋಡುವೆನು
ಆಲಯಗೋಪುರ ಗುಡಿಯ ಕಟ್ಟಿಸುವೆನೆ
ಅಭಾವವಾಗಿದೆ ಧನವೆನಗೆ ॥ ೧೫ ॥

ಮೃತ್ಯುಹರನೆ ನಿನ್ನ ಮೂರ್ತಿಯನೋಡಲು
ವಿಪ್ರರು ಎನ್ನ ಸೇರಿಸರು
ಉತ್ತಮ ತೀರ್ಥ ಪ್ರಸಾದವನಾದರೂ
ಎತ್ತಿನೀಡರು ನೀಚನೆಂದು ॥ ೧೬ ॥

ಸಂತತ ನಂದನು ಚಿಂತಿಸುತಿರಲಾಗ
ಕಂತುಹರನ ದಯದಿಂದ
ಅಂತರಂಗದೊಳೊಂದು ಪಂಥವು ತೋರಲು
ಸಂತಸಪಟ್ಟನು ನಂದ ॥ ೧೭ ॥

ಇಂದುಧರನೆ ನಿನ್ನ ಗಂಭೀರ ಭೇರಿಗೆ
ತಂದೀವೆತೊಗಲನೆಂದೆನುತ
ಕಂದನೆನ್ನುತ ದಯದಿಬಂದು ಕಾಯೆಲೊ ದೇವ
ಎಂದು ವಂದನೆಯ ಮಾಡಿದನು ॥ ೧೮ ॥

ಚಿತ್ತಶುದ್ಧಿಲಿ ಈವ ಪತ್ರಪುಷ್ಪದಸವು
ರತ್ನಭಂಗಾರಗಳಿಲ್ಲ
ಮತ್ತೆ ಪಾರ್ಥಗೆ ಹರಿಪೇಳಿದ ಪರಿಯಂತೆ
ಭಕ್ತಿಯೆಮಿಗಿಲು ಲೋಕದಲಿ ॥ ೧೯ ॥

ಉತ್ತಮ ತೊಗಲನು ಭಕ್ತಿಯಿಂದಲಿ ತಂದು
ಅರ್ಥಿಯಿಂದಲಿ ಹದಮಾಡಿ
ಮೃತ್ಯುಹರನ ಮೃದಂಗನಗಾರಿಗೆ
ನಿತ್ಯವುತಂದು ಒಪ್ಪಿಸುವ ॥ ೨೦ ॥

ಸಣ್ಣ ಕೆಲಸವೆಂದು ಖಿನ್ನತಾನಾಗದೆ
ಉನ್ನತ ಭಾವ ಭಕ್ತಿಯಲಿ
ಪನ್ನಗಭೂಷಣನ ಪಾದವ ನೆನೆಯುತ್ತ
ಧನ್ಯನಾದನು ನಂದನಾಗ ॥ ೨೧ ॥

ಭಾನು ಪುಟ್ಟಲು ನಂದ ಬೇಗಸ್ನಾನವಮಾಡಿ
ತಾನು ಭಸ್ಮವ ಧರಿಸುವನು
ಬೇರೊಂದನೆಣಿಸದೆ ಭೋಗಿಭೂಷಣಶಿವನ
ಭಾವಶುದ್ಧಿಯಲಿ ಚಿಂತಿಪನು ॥ ೨೨ ॥

ನಂದನ ಸಂಗಡನಿಂದರನೇಕರು
ಚಂದ್ರಶೇಖರನ ಪಾಡುತಲೆ
ಚಂದದಿಂದಲಿ ತಾವು ಮಾಡುವ ಕಾರ್ಯದಿ
ಹೊಂದಿಶಂಕರನ ಪಾಡುವರು ॥ ೨೩ ॥

ಚಿತ್ತನೆ ಕೆಲಸವನುತ್ತರಿಸಿಯೆ ನಂದ
ಮಿತ್ರರೊಡನೆ ಕೂಡಿಕೊಂಡು
ಹತ್ತಿರದೊಳಗಿಹ ವೈದ್ಯನಾಥನಗುಡಿ
ಗರ್ಥಿಯಿಂದಲೆ ತೆರಳಿದನು || ೨೪ ||

ಗ್ರಾಮಪ್ರದಕ್ಷಿಣೆ ಮೂರುಬಾರಿಯುಮಾಡಿ
ಸಾರಿಶಂಕರನ ಪಾಡುತ್ತ
ವಿಾರಿದಹರುಷದಿಸೇರಿ ದೇವಾಲಯ
ದ್ವಾರದಿ ನಿಂದನು ನಂದ || ೨೫ ||

ತಂದ ತೆಂಗಿನಕಾಯಿ ಹಣ್ಣು ಹೂವು ಸಹ
ಚಂದದಿ ತೊಗಲಿನ ಹೊರೆಯ
ಮುಂದಿಟ್ಟು ಹರಶಿವ ಕರುಣಿಸೆಂದೆನುತಾಲೆ
ನಂದ ವಂದನೆಯಮಾಡಿದನು || ೨೬ ||

ಮಂದಿರದೊಳಗಿಹ ಇಂದುಧರನ ಮುಂದೆ
ನಿಂದು ಪೂಜಿಸುವ ಅರ್ಚಕರ
ಚಂದದ ವೇದವು ಮಂಗಳಾರತಿಧೂಪ
ಕಣ್ದಣಿವಂದದಿ ಕಂಡ || ೨೭ ||

ಎದುರಲಿಕಂಡನು ಅಗಜೆಯರಮಣನ
ಹೃದಯದಿ ಕಂಡ ಶಂಕರನ
ಮುದದಿ ಹೊಂಪುಳಿಯಾಗಿ ಕಂಬನಿ ಸುರಿಯಲು
ಪದುಳದಿ ದೇಹವ ಮರೆತ || ೨೮ ||

ನೃತ್ಯಹರನಕಂಡು ಅತ್ಯಂತ ಹರುಷಾದಿ
ಚಿತ್ರದಂದದಿ ನಂದನಿರಲು
ಮುತ್ತಿದರಾತನ ಸುತ್ತಲು ಪುರಜನ
ಅಚ್ಚರಿಯಾಗಿ ನೋಡುತ್ತ || ೨೯ ||

ನಂದನಾತುರದಿಂದ ನಿಂದು ನೋಡಿದ ಶಿವ
ನಂದವು ತೋರದೆಯಿರಲು
ಮುಂದಕ್ಕೆ ನಡೆತಂದು ಮರಳಿ ನೋಡಿದ ಶಿವ
ಚಂದ್ರಶೇಖರ ತೋರು ಎನುತ ॥ ೩೦ ॥

ನಂದನಾಯಸವನು ಕಂಡನಾಗಲೆ ಭವನು
ನಂದಿಯಕೂಡೆ ಪೇಳಿದನು
ಸಂದೇಹ ಬೇಡ ಒಂದು ಪಕ್ಕಕೆಸರಿ
ಎಂದರೆ ನಂದಿ ಜರುಗಿದನು ॥ ೩೧ ॥

ಚಿತ್ತಸಂಶಯಬಿಟ್ಟು ಭಕ್ತರೆಲ್ಲರುಕೇಳಿ
ಮತ್ತೆ ತಿರುಪಂಕೂರಿನಲ್ಲಿ
ಒಪ್ಪುವೊನಂದಿಯು ಪಕ್ಕದಲ್ಲಿರುವುದು
ಅರ್ಥಿಯಿಂದಲೆ ಕಾಣಬಹುದು ॥ ೩೨ ॥

ಹರನಿಗೆವಂದಿಸಿ ನಂದತೆರಳಿದಗ್ರಾಮಕೆ
ಬರುತಿರಲೊಬ್ಬ ಭೂಸುರನು
ಮೆರೆವೊ ಚಿದಂಬರ ಚರಿತ್ರೆಯ ನರುಹಲು
ಪರಮಸಂತಸದಿ ಕೇಳಿದನು ॥ ೩೩ ॥

ತಾಂಡವೇಶನ ಮೂರ್ತಿಕಂಡು ಬರುವೆನೆಂದು
ಸಂಗಡಿಗರಿಗೆ ಪೇಳಿದನು
ಇಂದು ಹೊತ್ತಾಯಿತು ನಾಳೆಗೆ ಹೋಗುವ
ದೆಂದುಪೇಳಿದರಾಗ ಅವರು ॥ ೩೪ ॥

ಕತ್ತಲೆಆಯಿತು ಮತ್ತೆ ಊರಿಗೆಬರೆ
ಹೊತ್ತುಮಿಾರುವದು ಎಂದೆನುತಾ
ಚಿತ್ತದಿ ನಿನ್ನಯ ಧಣಿಯು ಕೋಪಿಸುವನು
ಮತ್ತೊಮ್ಮೆ ತೆರಳಬೇಕೆಂದು ॥ ೩೫ ॥

ಅಂದವಮಾತನುಕೇಳಿ ನಿಂದು ಯೋಚನೆಮಾಡಿ
ಹೊಂದದೆ ಆತನಾಣತಿಯ
ಬಂದಿಹೆ ಹೋಗದೆ ನಿಂದೆನಾದರೆ ನಾನು
ದಂಡಿಸುವನು ಎನ್ನ ಧಣಿಯು || ೩೬ ||

ಮಿತ್ರರಾಡಿದಮಾತು ಸತ್ಯವೆಂದೆನುತಾಲಿ
ಮತ್ತೊಮ್ಮೆ ಯೋಚಿಸಿ ಮನದಿ
ಭೃತ್ಯಧರ್ಮವ ನಾನು ತಪ್ಪಿದೆನಾದರೆ
ಕರ್ತುಶಂಕರ ಮೆಚ್ಚನೆಂದ || ೩೭ ||

ನಡೆಯಲ್ಲಿ ನಟರಾಜ ನುಡಿಯಲ್ಲಿ ತಾಂಡವ
ಪೊಡವಿಯೆಲ್ಲವು ಶಿವನೆಂದು
ಬಿಡದೆ ತನ್ನಲಿತಾನೆ ಧೃಡವಾಗಿ ನಂಬುತ
ಒಡನೆ ಊರಿಗೆ ನಡೆತಂದ || ೩೮ ||

ಅಂಬರವಾಸ ಚಿದಂಬರ ನಾಯಕ
ನಂಬಿದೆ ನಿನ್ನ ಪಾದವನು
ಬೆಂಬಿಡದೆ ಎನ್ನ ಶಂಭು ಶಂಕರಕಾಯೊ
ಗಂಗೆಯ ಧರಿಸಿದ ದೇವ || ೩೯ ||

ತಂದೆನಿನ್ನಯ ರೂಪವೆಂದಿಗೆ ತೋರುವೆ
ಎಂದು ಚಿಂತಿಸುತಲೆ ನಂದ
ಇಂದು ಕೇಳುವೆ ಎನ್ನ ಧಣಿಯ ನಾಣತಿಯನು
ಎಂದು ಮಿತ್ರರಿಗೆ ಪೇಳುವನು || ೪೦ ||

ಗದ್ದೆಯನುಳುವಾಗ ಬಿತ್ತವನೆಡುವಾಗ
ಕಿತ್ತುಕಳೆಯ ತೆಗೆವಾಗ
ಚಿತ್ತದಿ ನೆಲಸಿದ ತಾಂಡವಮೂರ್ತಿಯ
ಅರ್ಥಿಯಿಂದಲೆ ಕಾಣುವನು || ೪೧ ||

ದನಗಳ ಬಿಡುವಾಗ ಮರಗಳ ಕಡಿವಾಗ
ಬಿಡದೆ ಭಂಡಿಯ ಹೊಡೆವಾಗ
ಕಡುಭಕ್ತಿಯಿಂದ ಚಿದಂಬರ ಮಹಿಮೆಯ
ಬಿಡದೆ ಚಿಂತಿಸುವನು ನಂದ || ೪೨ ||

ಒಡೆಯನೊಂದಿಗೆ ನಾನು ನುಡಿದರೆ ಆಜ್ಞೆಯ
ಕೊಡುವನೊ ಕೋಪತಾಳುವನೊ
ನಡುಗುತ್ತ ಸಂಶಯ ಚಿತ್ತದಿಂದಿರುತಿರೆ
ನಡೆದಾವು ಹಲವು ಮಾಸಗಳು || ೪೩ ||

ತುತ್ತು ಬುತ್ತಿಯಕಟ್ಟಿ ನಿತ್ಯನಡೆವನಂದ
ಮತ್ತೆ ಚಿದಂಬರಕೆನುತ
ಸುತ್ತವರೆಲ್ಲರು ಇಟ್ಟರಾತಗೆ ಹೆಸರ
ನಿತ್ಯಯಾತ್ರಿಕನು ಎಂದೆನುತ || ೪೪ ||

ಸರಿಯವರೆಲ್ಲರು ಪಿರಿದುಕೌತುಕದಿಂದ
ಬೆರಗಾಗಿ ನಿಂದು ನೋಡಿದರು
ಅರಿಯಾದೆ ಆತನಪರಿಯನೆಲ್ಲವ ತಾವು
ಬರಿದೆ ಹಾಸ್ಯವನು ಮಾಡಿದರು || ೪೫ ||

ಸದ್ದುಗದ್ದಲ ಒಲ್ಲ ಮದ್ಯಮಾಂಸವ ಒಲ್ಲ
ಗುದ್ದಾಟ ಚಾಡಿಯ ಒಲ್ಲ
ಅದ್ವೈತಮೂರುತಿ ಪರಶಿವನಲ್ಲದೆ
ಕ್ಷುದ್ರದೈವಗಳ ತಾವೊಲ್ಲ || ೪೬ ||

ಒಮ್ಮೆಶಂಕರನ ನಾಮವಪಾಡುವ
ಒಮ್ಮೆ ಚಿಂತನೆಯ ಮಾಡುವನು
ಸುಮ್ಮಾನದಿಂದಲೆ ಭಸ್ಮವಧರಿಸುತ
ತನ್ನದೇಹವ ಮರೆಯುವನು || ೪೭ ||

ಭೂಸುರನಸೇವೆಯ ಪ್ರೀತಿಯಿಂದಲೆ ಮಾಡಿ
ತಾಪವರ್ಜಿತನ ಪೂಜಿಸುತ
ಆ ಪರಮಾತ್ಮನ ಹೃದಯದಿ ನಿಲಿಸುತ
ಕೋಪವರ್ಜಿತನಾದ ನಂದ || ೪೮ ||

ನಂದನ ಪರಿಯನು ಕಂಡರನೇಕರು
ಹೊಂದಿತು ಭೂತವೆಂದೆನುತಾ
ಬಂಧುಗಳೆಲ್ಲರು ಒಂದಾಗಿ ಸೇರುತ
ನಿಂದು ಯೋಚನೆಯ ಮಾಡಿದರು || ೪೯ ||

ಮತ್ತನೊ ಮೂಢನೊ ಮರುಳನೊ ಜಡನೊ
ಮತ್ಯಾವಗ್ರಹವು ಕಾಡಿಪುದೊ
ಉತ್ತಮವಾದ ಯಂತ್ರವ ಕಟ್ಟಿಸಿ
ಚಿತ್ತವ ನಿಲಿಸಬೇಕೆಂದರು || ೫೦ ||

ನಮ್ಮಯಕುಲದೈವ ಕರುಪಣ್ಣಪೆರಿಯನು
ಇರುಳ ಕಾಟ್ಟೇರಿ ಪೆತ್ತಣ್ಣ
ಹಿರಿಯದೈವವ ಮರೆಯೆ ಬರಿದೆ ಬಂದಿದೆಯೆಂದು
ಹಿರಿದು ಯೋಚನೆಯ ಮಾಡಿದರು || ೫೧ ||

ಎಲ್ಲರು ಕೂಡುತ ಉಲ್ಲಾಸದಿಂದಲೆ
ಸಲ್ಲಿಸಿ ದೈವಪೂಜೆಯನು
ನಿಲ್ಲದೆ ಕುರಿಕೋಳಿ ಇತ್ತು ಬಲಿಗಳನ್ನು
ಸಲ್ಲಿಸಿ ನಾಟ್ಯವಾಡಿದರು || ೫೨ ||

ಹೆಂಡವ ಕುಡಿಯುತ್ತ ಮಂಡೆಯ ತೂಗುತ್ತ
ಭಂಡಮಾತುಗಳನಾಡುತ್ತ
ಪುಂಡರತೆರದಲಿ ಕುಣಿಯುವರನುಕಂಡು
ನೊಂದನಾಗಲೆ ನಂದ ಮನದಿ || ೫೩ ||

ಚಿತ್ತಸಾಕ್ಷಿಯೆ ನೀನು ಇತ್ತುಸನ್ಮತಿಯನು
ಮತ್ತಿವರಕಾಯಬೇಕೆನುತ
ಭಕ್ತಶಿರೋಮಣಿ ನಂದನು ಮರುಗಿದ
ನತ್ಯಂತ ವ್ಯಾಕುಲದಿಂದ ॥ ೩೪ ॥

ಒಂದುದಿವಸ ನಂದ ಅಂಜುತ್ತ ನಡೆತಂದ
ವಂದಿಸಿದನು ತನ್ನ ಧಣಿಗೆ
ಇಂದು ಚಿದಂಬರ ಕ್ಷೇತ್ರಕ್ಕೆ ಹೋಗಲು
ತಂದೆ ಅಪ್ಪಣೆಯ ಪಾಲಿಪುದು ॥ ೩೫ ॥

ಹಿಂದಿನ ದಿನದಲಿ ಒಂದಾಗಿ ಹೊಲೆಯರು
ಬಂದು ವಿಪ್ರನಿಗೆ ವಂದಿಸುತಾ
ಹೊಂದಿದೆ ಭೂತವು ನಂದನಿಗೆನುತಲೆ
ಇಂದು ನೀವ್ ಕೃಪೆಯನುಮಾಡಿ ॥ ೩೬ ॥

ಎಲ್ಲ ಕೆಲಸಗಳ ಅಲ್ಲಿಯೆ ಬಿಡುವನು
ನಿಲ್ಲದೆ ನಾಟ್ಯವಾಡುವನು
ಚೆಲ್ವಿಸಪಾರ್ವತಿರಮಣ ಸಲಹೆನ್ನ ಎನುತಾಲೆ
ಸೊಲ್ಲುಸೊಲ್ಲಿಗೆ ಎರಗುವನು ॥ ೩೭ ॥

ಜಾತಿರೀತಿಯನೆಲ್ಲ ಈತೆರದಲಿಬಿಟ್ಟು
ಮಾತುಮಾತಿಗೆ ಹರನೆನುತ
ಕಾತರಗೊಳುತಿಹ ಈತಗೆ ದಯದಿಂದ
ನೀತಿಮಾರ್ಗವ ಪೇಳಬೇಕು ॥ ೩೮ ॥

ಮತ್ತವರಮಾತನು ಚಿತ್ತದಿನೆನೆಯುತ
ವಿಪ್ರ ತಾ ಕುಳ್ಳಿರಲಾಗ
ಮತ್ತೆ ಚಿದಂಬರಕ್ಹೋಗಲಾಣತಿಯನು
ಭೃತ್ಯನು ಬಂದು ಬೇಡಿದನು ॥ ೩೯ ॥

ನುಡಿದ ಮಾತನು ಕೇಳಿ ಕಡುಕೋಪತಾಳುತ
ಕಡೆಗಣ್ಣಿನಿಂದ ನೋಡಿದನು
ಸಿಡಿಮಿಡಿಗುಟ್ಟುತ್ತ ಕಿಡಿಗಳಸುರಿಸುತ್ತ
ಜಡಿದು ಝೇಂಕರಿಸಿ ನುಡಿದನು ‖ ೬೦ ‖

ಹೊಲೆಯನೆ ನೀನ್ಯಾಕೆ ಮಲೆತೆಯೊ ಈಪರಿ
ಕುಲದರೀತಿಯನೆಲ್ಲ ಬಿಟ್ಟು
ಒಲಿದು ಚಿದಂಬರಯಾತ್ರೆಗಾಣತಿಯನು
ಸಲಿಗೆಯಿಂದಲೆ ಬೇಡಿದೆಯಾ ‖ ೬೧ ‖

ಮತ್ತೆ ಚಿದಂಬರ ಕ್ಷೇತ್ರಕೆ ಹೋಗಲು
ಉತ್ತಮ ವಿಪ್ರನೆ ನೀನು
ತೊತ್ತು ಕೆಲಸಬಿಟ್ಟು ಹೊತ್ತನು ಕಳೆವೆಯಾ
ಕತ್ತನೆತ್ತದೆ ನಡೆಯೆಂದ ‖ ೬೨ ‖

ತುಚ್ಛ ನಂದನೆ ನೀನು ಹೆಚ್ಚಿನ ಗರ್ವದಿ
ಹುಚ್ಚು ಮಾತುಗಳನಾಡುವೆಯಾ
ರಚ್ಚೆಯ ಮಾಡದೆ ಎಚ್ಚರದಿಂದಿರು
ಕೊಚ್ಚುವೆ ನಿನ್ನ ನಾಲಿಗೆಯ ‖ ೬೩ ‖

ಅಂದ ಮಾತನು ಕೇಳಿ ನೊಂದನು ಮನದಲ್ಲಿ
ನಿಂದನು ಮೌನಭಾವದಲಿ
ಹಿಂದಕ್ಕೆ ಹೋದನು ಬಂದವು ಕಣ್ಣೀರು
ಹಿಂದೆಮಾಡಿದ ಕರ್ಮವೆನುತ ‖ ೬೪ ‖

ಮರುಗುತ್ತ ಬಂದನು ಮರದಡಿ ಕುಳಿತನು
ಪರಿಪರಿಯಿಂದ ರೋದಿಸುತ
ಗಿರಿಸುತೆ ಅರಸನೆ ಕರುಣಾಳು ದೇವನೆ
ಮರೆತೆಯ ಈಶ್ವರ ಎನ್ನ ‖ ೬೫ ‖

ಬಾಲನ ನುಡಿಕೇಳಿ ಕಾಲನಮಡುಹಿದೆ
ಫಾಲಲೋಚನ ಪಶುಪತಿಯೆ
ಬಾಲೆ ಪಾರ್ವತಿಯನ್ನು ವರಿಸಿದ ಶಂಕರ
ಶೂಲಪಾಣಿಯೆ ಸಲಹೆನ್ನ || ೬೬ ||

ಸಾಗರ ಕಡೆಯಲು ಆಗ ಗರಳವುಟ್ಟೆ
ಯೋಗಿಗಳೆಲ್ಲ ಪ್ರಾರ್ಥಿಸಲು
ಜಾಗುಮಾಡದೆ ಬಂದು ಪಾನವ ಮಾಡಿದೆ
ರಾಗರಹಿತ ಕಾಯೊ ದಯದಿ || ೬೭ ||

ಯಾಗಭಂಗವಮಾಡಿ ಯೋಗಿವೇಷದಿನಿಂದು
ಆಗಮಮೂಲವನರುಹಿ
ಲೋಗರನೆಲ್ಲರ ಕರುಣದಿ ಸಲಹಿದ
ವಾಗಗೋಚರ ಕಾಯೊ ದಯದಿ || ೬೮ ||

ಸಂಜೆಯಕಾಲದಿ ಅಂಗನೆಗೌರಿಯ
ರಂಗಮಂಟಪದಿ ಕುಳ್ಳಿರಿಸಿ
ಸಂಗೀತ ವಾದ್ಯವು ಸಹಿತ ನರ್ತನ ಗೈವ
ತಾಂಡವೇಶನೆ ಸಲಹೆನ್ನ || ೬೯ ||

ನಡೆವೋದುಜಗವೆಲ್ಲ ಒಡೆಯ ನಿನ್ನಿಚ್ಛೇಲಿ
ಮಡಿವೋದು ನಿನ್ನ ಕೋಪದಲಿ
ತಡೆಯದೆಕೋಪವ ಬಿಡದೆಯೆಲೋಭವ
ಪಡೆಯುವರುಂಟೆ ಸದ್ಗತಿಯ || ೨೦ ||

ದೇವನೆ ನಿನ್ನನು ಭಾವಿಸಿ ನೋಡದೆ
ದೇಹಧಾರಣೆಯ ಮಾಡುವರೆ
ಜೀವವ ಬಿಡುವೆನು ಎನುತ ಚಿಂತಿಸೆ ಹರ
ಬೇರೊಂದು ಸಲಹೆ ತೋರಿದನು || ೨೧ ||

ಉತ್ತಮ ದ್ವಿಜಸೇವೆ ಭಕ್ತಿಯಿಂದಲೆ ಮಾಡಿ
ಚಿತ್ತವನರಿತು ವರ್ತಿಸುತ
ಮತ್ತೆ ಅಪ್ಪಣೆಯನು ಪಡೆವೆನೆಂದೆನುತಾಲೆ
ಅತ್ಯಂತ ಹರುಷದಿ ಬಂದ || ೭೨ ||

ತನುವದಂಡಿಸುವನು ಭವನವಂದಿಸುವನು
ಮನದಿ ಚಿಂತನೆಯ ಮಾಡುವನು
ವನದೊಳಗಿರುತಿಹ ಗಿರಿ ನದಿ ಪಕ್ಷಿಯ
ಮೃಡನೆಂದು ಭಾವಿಸುತಿಹನು || ೭೩ ||

ಪರರಕಷ್ಟವನೋಡಿ ಮರುಗುತಲಿರುವನು
ಕರೆದು ಸಹಾಯಮಾಡುವನು
ಧರೆಯೊಳಗಿರುತಿಹ ಪರಿಪರಿವಸ್ತುವ
ಪರಶಿವನೆಂದು ನೋಡುವನು || ೭೪ ||

ಹತ್ತಾರು ಮಾಸವನುತ್ತರಿಸಿಯೆ ನಂದ
ಮತ್ತೊಮ್ಮೆ ದ್ವಿಜನ ಕೇಳಿದನು
ಚಿತ್ತದಿಕೋಪಿಸಿ ಬೈಯ್ಯಲದನು ಕೇಳಿ
ಅತ್ಯಂತ ವ್ಯಾಕುಲನಾದ || ೭೫ ||

ನಂದನಿರವನೋಡಿ ಬಂಧುಗಳೆಲ್ಲರು
ಹೊಂದಿತು ಹುಚ್ಚು ಎಂದೆನುತಾ
ಮಂದಿರದೊಳಗವನ ತಂದು ಕೂಡಿದರಾಗ
ತಂಡತಂಡದಲಿ ಶಿಕ್ಷಿಸುತ || ೭೬ ||

ಸೂತ್ರಧಾರನೆ ನಿನ್ನ ನಾಟ್ಯವಿದಾದರೆ
ನಾಟಕದವರ ತಪ್ಪೇನು
ಕೋಟಲೆಗೊಳಿಸದೆ ನೀತಿಬಾಹಿರರನು
ಪ್ರೀತಿಯಿಂದಲೆ ಸಲಹಯ್ಯ || ೭೭ ||

ಹಿಗದೆ ಸುಖ್ಗದಲ್ಲಿ ತಗ್ಗದೆ ದುಃಖದಿ
ಸ್ವರ್ಗಸುಖಕೆ ಸರಿಯೆನಿಸಿ
ಭರ್ಗನಪಾದವ ಬಿಡದೆಧ್ಯಾನಿಸುತಲಿ
ನಿಗ್ರಹಿಸಿದ ತನ್ನ ಮನವ ॥ ೭೮ ॥

ಹೊಲದಕೆಲಸವೆಲ್ಲ ನಿಲಲು ಕೋಪದಿ ವಿಪ್ರ
ಹೊಲೆಯರನೆಲ್ಲ ಕರೆಸಿದನು
ನಿಲಿಸಿದಿರ್ಯಾತಕೆ ಕೆಲಸವನೆಲ್ಲವ
ಆಲಸರಾದಿರಿ ಎಂದನವರ ॥ ೭೯ ॥

ನಂದನಪರಿಯನು ತಂಡತಂಡದಿಪೇಳೆ
ಮಂದಿಯ ಕಳುಹಿ ಕರೆಸಿದನು
ಬಂದುವಂದಿಸಿ ನಂದನಿಂದನಾಗಲೆ ನೋಡಿ
ಹೊಂದಿದ ಪರಮ ಆಚ್ಚರಿಯ ॥ ೮೦ ॥

ಇರವನೋಡಲು ವಿಪ್ರ ಅರಿತನೆಲ್ಲವ ನಂದ
ಮರುಳಲ್ಲ ಭಕ್ತನೆಂದೆನುತಾ
ವರಮಾರ್ಗದಿಂದ ಹಿಂದಿರುಗಿಸಬೇಕೆಂದು
ಪರಮಕೋಪವನೆ ತಾಳಿದನು ॥ ೮೧ ॥

ಕರಗಳಮುಗಿಯುತ್ತ ಶರಗೊಡ್ಡಿ ಬೇಡುತ್ತ
ಭರದಿದೈನ್ಯವನೆ ತೋರುತ್ತ
ವರಚಿದಂಬರಕೀಗ ತೆರಳಲಪ್ಪಣೆಯನು
ಹರುಷದಿ ಕರುಣಿಸಬೇಕು ॥ ೮೨ ॥

ನಂದನಿರವಕಂಡು ಹೊಂದುತಾಶ್ಚರ್ಯವ
ಮಂದಿಯಕರೆದು ಹೇಳಿದನು
ಸಂದೇಹವಿಲ್ಲವು ಚಂದ್ರಶೇಖರ ಭಕ್ತ
ನೆಂದು ನಿಶ್ಚಯವಮಾಡಿದನು ॥ ೮೩ ॥

ಎನ್ನ ಕೆಲಸಗಳ ಚೆನ್ನಾಗಿ ಮಾಡದೆ
ಸುಮ್ಮಾನದಿಂದ ಪಾಡುವೆಯಾ
ನಿನ್ನವರೆಲ್ಲರು ಚಿಂತಿಸುತಿರುವರು
ಮನ್ನಿಸು ನೀನವರನುಡಿಯ ॥ ೮೪ ॥

ಗದ್ದೆಕೆಲಸವೆಲ್ಲ ಬಿದ್ದು ಹೋಯಿತು ಈಗ
ಸದ್ದುಮಾಡದೆ ಶೀಘ್ರದಿಂದ
ಎದ್ದು ನೀವೆಲ್ಲರು ಸಿದ್ಧವಪಡಿಸಿಯೆ
ಸುದ್ದಿಯ ಹೇಳಬೇಕೆಂದ ॥ ೮೫ ॥

ಹೊಲದ ಕುಯಿಲನೆಲ್ಲ ನಲವಿಂದ ಮಾಡಲು
ಸಲಿಸುವೆ ನಾಣತಿ ನಿನಗೆ
ಒಲಿವೊ ಚಿದಂಬರ ಕ್ಷೇತ್ರಕೆ ನೀನೀಗ
ಒಲವಿಂದ ಹೋಗಲಿಬಹುದು ॥ ೮೬ ॥

ಅಂದಮಾತನು ಕೇಳಿ ಅತಿ ಹರುಷದಿ ನಂದ
ಬಂದು ವಂದಿಸಿದನು ದ್ವಿಜಗೆ
ಇಂದು ತಾಂಡವ ಎನಗೆ ಮಾಡಿದ ಕೃಪೆಯೆಂದು
ಆನಂದದಿ ಪಾಡಿದ ಹರನ ॥ ೮೭ ॥

ಎದ್ದುಹೋದನು ನಂದ ಗದ್ದೆಯಕಡೆಗಾಗ
ಅದ್ಭುತ ಪೇಳಲಿನ್ನಳವೆ
ಬಿದ್ದುಹೋದವು ರಾಶಿ ಮಧ್ಯಾಹ್ನವೇಳೆಗೆ
ಸುದ್ದಿಯನರುಹಲು ಬಂದ ॥ ೮೮ ॥

ಸತಿಸುತರನುಕೂಡಿ ಸುಖದಿ ಭೋಜನಮಾಡಿ
ಹಿತದಿಂದ ಮಲಗಿರೆ ವಿಪ್ರ
ಮತಿವಂತ ನಂದನು ಅತಿಬೇಗ ಬಂದನು
ಅತಿಶಯ ಸಂತೋಷದಿಂದ ॥ ೮೯ ॥

ಹೊಲದ ಕೆಲಸವೆಲ್ಲ ಘಳಿಲಾನೆ ಮುಗಿದಾವು
ನಲವಿಂದ ಬಂದು ನೀನೋಡು
ಎನಲಾಗ ವಿಪ್ರನು ತಲೆದೂಗಿಬೇಗನೆ
ಹೊಲದಕಡೆಗೆ ತೆರಳಿದನು ॥ ೯೦ ॥

ಆಗಸದಂತಿಹ ರಾಗಿಯ ರಾಶಿಯ
ಬೇಗದಿ ನೋಡಿದನವನು
ಮೂಗಿನ ಮೇಲ್ಬೆರಳಿಟ್ಟು ಸೋಜಿಗದಿಂದ
ಹೀಗೆ ಪಕ್ಕಕೆ ತಿರುಗಿದನು ॥ ೯೧ ॥

ಅಲ್ಲಿಯೆ ಬಿದ್ದಿದ್ದ ನೆಲ್ಲಿನ ರಾಶಿಯ
ಉಲ್ಲಾಸದಿಂದ ನೋಡಿದನು
ಎಲ್ಲರಂದದಿ ನರನಲ್ಲವೆಂದೆನುತಾಲೆ
ಮೆಲ್ಲನೆ ಭ್ರಾಂತಿ ಪೊಂದಿದನು ॥ ೯೨ ॥

ಎದ್ದಿರುವೆನೊ ನಾನು ಹೊದ್ದಿರುವುದೊ ಭ್ರಾಂತಿ
ಬಿದ್ದಿತೊ ಕನಸು ಎಂದೆನುತಾ
ಬಿದ್ದನಾಶ್ಚರ್ಯದ ಕಡಲೊಳು ಬ್ರಾಹ್ಮಣ
ಎದ್ದು ನಂದನಿಗೆ ಹೇಳಿದನು ॥ ೯೩ ॥

ನಂದ ನಿನ್ನಿಂದಲೆ ಸಂದಿಲ್ಲ ಕಾರ್ಯವು
ಮಂದಿಗಳಿಗೆ ಕಡುಚೋದ್ಯ
ಇಂದುಶೇಖರನಿದ ನಿನ್ನಿಂದ ಮಾಡಿಸಿದ
ಸಂದೇಹಬೇಡ ಕೇಳೆಂದ ॥ ೯೪ ॥

ಪರಶಿವ ಮಹಿಮೆಯ ಮೆರೆಸಲು ಲೋಕದಿ
ನರನಾಗಿ ಜನಿಸಿದೆ ನೀನು
ಮರವೆಯನೊಂದಿಹ ದುರಿತ ಕರ್ಮಿಗಳಿಗೆ
ಅರುಹಿದೆ ಭಕ್ತಿ ಮಾರ್ಗವನು ॥ ೯೫ ॥

ದಾಸನಂದನೆ ನೀನೀಸಿದೆ ದುರಿತವ
ಮೋಸಹೋದೆನು ಪಾಪಿ ನಾನು
ಆಸೆಯಿಂದಲೆ ನಿನ್ನ ಗಾಸಿಯಗೊಳಿಸಿದೆ
ದೋಷದೂರನೆ ಮನ್ನಿಸೆನ್ನ ॥ ೯೬ ॥

ಪುಷ್ಪದಿಂದಲೆ ನಾರು ಒಪ್ಪಿತು ಹರಗೆಂದು
ಇಪ್ಪೋದು ಲೋಕವಾಕ್ಯದಲಿ
ತಪ್ಪ ಮನ್ನಿಸಿ ಎನ್ನ ಒಪ್ಪಿಸು ಹರಗೆಂದು
ವಿಪ್ರ ತಾ ನುಡಿದನು ಮುನ್ನ ॥ ೯೭ ॥

ನಿನ್ನ ಸೇವಕ ನಾನು ಎನ್ನ ಮನ್ನಿಸು ನೀನು
ಪನ್ನಗಭೂಷಣನಡಿಯ
ಇಂದು ತೋರಿಸು ಎಂದು ನಂದನಿಗೆರಗುತ
ದಂಡದಂದದಿ ನಮಿಸಿದನು ॥ ೯೮ ॥

ಎರಗಿದ ವಿಪ್ರನ ಭರದಿಂದ ಎತ್ತುತ
ಚರಣಕ್ಕೆ ನಮಿಸಿ ಪೇಳಿದನು
ಗುರಿಯಮಾಡುವೆ ಎನ್ನ ಉರುತರ ನರಕಕೆ
ಪರಮಗುರುವೆ ಪಾಲಿಸೆನ್ನ ॥ ೯೯ ॥

ಭೂಸುರೋತ್ತಮ ನೀನು ದಾಸಹೊಲೆಯ ನಾನು
ದೋಷಕೆ ಗುರಿಮಾಡಬೇಡ
ಈ ಸಮಯದಿ ಎನ್ನ ಆಶೆಯ ತೀರಿಸು
ಈಶನಬಳಿಗೆ ಹೋಗುವೆನು ॥ ೧೦೦ ॥

ಹೊಲೆಯ ನೀನಲ್ಲವು ಒಲಿದು ಪವಿತ್ರನು
ಪರಶಿವಭಕ್ತಿಸಂಯುತನು
ವರಚಿದಂಬರಕೀಗ ತೆರಳದ ಮುನ್ನಮೆ
ಹರಸಿ ಮನ್ನಿಸು ಎನ್ನ ನಂದ ॥ ೧೦೧ ॥

ತಾಂಡವೇಶನಕೃಪೆ ಎನ್ನಮೇಲಾಗಲು
ಇನ್ನೊಂದು ದಾರಿಯ ತೋರು
ನಿನ್ನ ಸಂಗತಿಯಿಂದ ಎನ್ನಸದ್ಗತಿಯನು
ಇನ್ನು ಸಾಧಿಸಿಕೊಂಬೆನೆಂದ ॥ ೧೦೨ ॥

ಸತಿಸುತರೊಳಗಿರ್ಪ ಅತಿಶಯ ಮಮತೆಯ
ಪತಿತಪಾವನನ ಮೇಲಿರಿಸು
ಹಿತದಿಂದ ಜಗವೆಲ್ಲ ಪಶುಪತಿ ಮಯವೆಂದು
ಮತಿಯೊಳು ಚಿಂತಿಸು ಸತತ ॥ ೧೦೩ ॥

ಅಸ್ಥಿರದೊಡಲನು ನೆಚ್ಚಿನಂಬಿರಬೇಡ
ತುಚ್ಛ ಮಾತುಗಳಾಡಬೇಡ
ಹೆಚ್ಚಿಗೆ ಹೇಳಲು ಶಕ್ತನಲ್ಲವು ನಾನು
ಮುಚ್ಚುಮರೆಯೆ ನಿನಗೆಂದ ॥ ೧೦೪ ॥

ಈಪರಿಯಲಿ ಪೇಳಿ ತೆರಳಲು ನಂದನು
ಭೂಸುರೋತ್ತಮನಾಗ ಮನದಿ
ಕಾತರಗೊಳುತಲೆ ತಿರುಗಿನೋಡಲು ನಂದ
ನಾತುರದಲಿ ಪೋಗುತಿರಲು ॥ ೧೦೫ ॥

ನಿಲ್ಲುನಿಲ್ಲೆನುತಲೆ ತಲ್ಲಣಗೊಳ್ಳುತ
ಅಲ್ಲಿಗೋಡಿದ ವಿಪ್ರನಾಗ
ಮೆಲ್ಲನೆ ನಂದನ ಮುಖವನೆ ನೋಡುತ
ಉಲ್ಲಾಸದಿಂದ ನುಡಿದನು ॥ ೧೦೬ ॥

ಎನ್ನ ಗುರುವೆ ನಂದ ನಿನ್ನಿಂದ ಆನಂದ
ಎಂದಿಗೆ ನಿನ್ನ ನೋಡುವೆನು
ಹಿಂದಿರುಗುವೆ ಎಂದು ನಂಬಿಕೊಂಡಿರುವೆನು
ನಿಂದೊಮ್ಮೆ ಮಾತನಾಡೈಯ್ಯ ॥ ೧೦೭ ॥

ವಾರಿಧಿಯಲಿಬಿದ್ದ ನೀರಿನಗುಳ್ಳೆಯು
ತೋರುವದೇ ಬೇರೆಯಾಗಿ
ಸಾರೆ ಚಿದಂಬರದೀಶನ ಸೇರಲು
ತೋರುವದೇ ಬೇರೆಕಾಯ || ೧೦೮ ||

ಈ ರೀತಿಯಲಿ ನಂದ ಪೇಳಿ ಸಂತಸದಿಂದ
ಬೇರೊಂದ ಮಾತನಾಡದಲೆ
ಮೀರಿದಹರುಷ ಉಕ್ಕೇರಿಸೂಸುತ್ತಿರೆ
ಸಾರಿ ಶಂಕರನ ಪಾಡಿದನು || ೧೦೯ ||

ಬೇಡನ ಬಲೆಯಿಂದ ಓಡಿದ ಮೃಗದಂತೆ
ರೂಢಿಯೊಳಗೆ ಕುಣಿಯುತಲಿ
ಪಾಡುತ್ತ ಪರಶಿವಸುಧೆಯ ಸಾಗರದೊಳು
ಮೂಡಿ ಮುಳುಗಾಡಿದ ನಂದ || ೧೧೦ ||

ಇಂದಿನಪರಿಯಂತ ನಿನ್ನನೆ ನೆನೆಯುತ್ತ
ಬಂಧನದೊಳಗಿದ್ದೆ ಹರನೆ
ಬಂದುದು ದಯ ಎನ್ನಮೇಲೆಂದು ನಂದನು
ಬಂದ ಚಿದಂಬರಕಾಗಿ || ೧೧೧ ||

ಅಂಧ ಕಣ್ಣುಗಳನುಹೊಂದಿದ ಪರಿಯಂತೆ
ಆನಂದವಪಡುತಾಲೆ ಮನದಿ
ಅಂಬಿಕೆ ಅರಸನ ನೆನೆದು ತಾ ಬರುತಿರೆ
ಮುಂದೆ ಕಂಡನು ಮಹನದಿಯ || ೧೧೨ ||

ಕುಂಭಸಂಭವಸತಿ ಬಂದಳು ನದಿಯಾಗಿ
ಕುಂಭಿನಿಜನರ ಪಾಲಿಸಲು
ಅಂಬುಜನಾಭ ಶ್ರೀರಂಗನಬಳಸುತ
ಬಂದಳು ಸಾಗರಕಾಗಿ || ೧೧೩ ||

ತುಂಬಿ ಕಾವೇರಿಯು ಸಂಭ್ರಮದಿಂದಲೆ
ಮುಂದಕೆ ಸಾಗುತಲಿರಲು
ಹಿಂಗಿತು ಭವತಾಪವೆಂಬಂತೆ ನಂದನು
ಮಿಂದನು ಸಂತಸದಿಂದ ॥ ೧೧೪ ॥

ನೊರೆಯುತ ಕಾವೇರಿ ಹರಿಯುತಲಿರಲಾಗ
ತೆರಳುವ ಪರಿಯ ಕಾಣದಲೆ
ಪರಿಪರಿಯಿಂದಲೆ ಹರನ ಪಾಡುತಲಿರೆ
ತರಣಿಯಕಂಡ ದೂರದಲಿ ॥ ೧೧೫ ॥

ದೋಣಿಯ ಕಂಡನು ದೂರದಿ ನಂದನು
ಏರಿಸುವರು ಯಾರು ಎನುತ
ಬಾರಿಬಾರಿಗು ಸುತ್ತ ತಿರುಗಿನೋಡುತಲಿರೆ
ತೋರಿದನೊಬ್ಬ ಅಂಬಿಗನೂ ॥ ೧೧೬ ॥

ಕಪ್ಪುಮೈಯವನಿಗೆ ಒಪ್ಪುವೊ ವಿಭೂತಿ
ಇಪ್ಪೋದು ಕೈಲೊಂದುಹುಟ್ಟು
ತಪ್ಪದೆ ನಿಮ್ಮನು ತಡಿಯ ಸೇರಿಸುವೆನು
ತೆಪ್ಪವನೇರಿ ನೀವೆಂದ ॥ ೧೧೭ ॥

ನಂದನ ಸಂಗಡ ಬಂದರು ಹರದರು
ನಿಂದಿತು ನಮ್ಮ ವ್ಯಾಪಾರ
ಎಂದು ಚಿಂತಿಸುತಿರೆ ನಂದನವರಕೂಡಿ
ಬಂದನು ದೋಣಿಯ ಎಡೆಗೆ ॥ ೧೧೮ ॥

ನುಡಿದ ಮಾತನು ಕೇಳಿ ಬಿಡದೆ ತೆಪ್ಪವನೇರಿ
ನಡೆದರು ಸಂತಸದಿಂದ
ಗಡಿಮಿತಿಯಿಲ್ಲದೆ ಮೃಡನ ಪಾಡಲು ನಂದ
ಪಡೆದರು ಪರಮ ಹರ್ಷವನು ॥ ೧೧೯ ॥

ಹರನ ಕೀರ್ತನೆ ಕೇಳಿ ಪರವಶರಾದರು
ಮರೆತರು ದೇಹಭಾವವನೂ
ಅರಿತಾರು ಪರಶಿವಮಹಿಮೆಯ ಕೇಳುತ್ತ
ಬೆರತಾರು ಭಕ್ತಿಮಾರ್ಗದಲಿ || ೧೨೦ ||

ತಡಿಯಸೇರಲು ನಂದ ಒಡನೆ ಬಾಡಿಗೆಯನು
ಕೊಡುವೆನು ಎನುತ ಯೋಚಿಸಲು
ತಡೆಯದೆ ಹರಿಗೋಲ ನಡೆಸೋನ ಕಾಣದೆ
ಪಡೆದನು ಪರಮ ಆಚ್ಚರಿಯ || ೧೨೧ ||

ಏನಿದಚ್ಚರಿಯೆಂದು ತಾನೆ ತಿಳಿದನಾಗ
ದೀನಪಾಲಕನ ಪಾಡುತಲೆ
ತಾನೆ ಸೇರಿಸಿದನು ತಡಿಯನೆಂದೆನುತಾಲಿ
ಸಾನುರಾಗದಿ ನಡೆತಂದ || ೧೨೨ ||

ದೂರದಿಂದಲೆ ಕಂಡ ಭಾರಿಯ ಗೋಪುರ
ವಿೂರಿದ ಸಂತಸದಿಂದ
ಬಾರಿಬಾರಿಗು ನಮಸ್ಕಾರವ ಮಾಡುತ್ತ
ಮಾರಹರನ ಸ್ತುತಿಸಿದನು || ೧೨೩ ||

ಆವನ ನಯನವು ಪಾವಕ ಶಶಿರವಿ
ಆವನ ನುಡಿಯು ವೇದಗಳು
ಆವನಿಂದಲೆ ಜನಿಸಿತು ಚತುರ್ವರ್ಣವು
ದೇವದೇವನೆ ಶರಣಾಗು || ೧೨೪ ||

ಧರೆಯೊಳು ಕೈಲಾಸ ವರಚಿದಂಬರದಲಿ
ಪರಿಪರಿಯಿಂದ ನರ್ತಿಸುತ
ಪರಮ ಪದವನಿತ್ತು ಹರುಷದಿ ಕಾಯುವ
ವರದ ತಾಂಡವ ಸಲಹೆನ್ನ || ೧೨೫ ||

ಮುಂದೆ ಬರುತ ಕಂಡ ನಂದನು ಮಹದ್ವಾರ
ದಂಡದಂದದಿ ನಮಸ್ಕರಿಸಿ
ಮಂಡೆಯ ಮೇಲಿಟ್ಟು ಕೈಯನು ಪಾಡುತ್ತ
ಚಂದದಿ ನಾಟ್ಯವಾಡಿದನು || ೧೨೬ ||

ಹಾಡುತ್ತ ಹೊಗಳುತ್ತ ಹರನ ಕೊಂಡಾಡುತ್ತ
ವಾರಿಗೆಯವರನು ಕೂಡಿ
ಸಾರಿಸಂತಸದಿಂದ ಊರಪ್ರದಕ್ಷಣೆ
ಬಾರಿಬಾರಿಗು ರಚಿಸಿದನು || ೧೨೭ ||

ಹರನ ಕೀರ್ತನೆ ಕೇಳಿ ಪುರದವರೆಲ್ಲರು
ಹಿರಿದು ಸಂತೋಷವ ತಾಳಿ
ನರನಲ್ಲ ಈತನು ಪರಮಪಾವನನೆಂದು
ಪರಿಪರಿ ಮಾತನಾಡಿದರು || ೧೨೮ ||

ಹರನ ಕೊಂಡಾಡುತ್ತ ಹರುಷದಿಂದಲಿ ನಂದ
ಕಳೆದನು ಮೂರು ರಾತ್ರಿಗಳು
ವರಭಕ್ತನಂದನ ಕರುಣಿಸಬೇಕೆಂದು
ಪರಮಮಂಗಳನು ಯೋಚಿಸಿದ || ೧೨೯ ||

ಅಂದಿನ ಸ್ವಪ್ನದಿ ಅಂಗಜ ವೈರಿಯ
ಕಂಡರು ವಿಪ್ರಗುಂಪಿನಲಿ
ಇಂದು ನೀವೆಲ್ಲರು ಒಂದಾಗಿ ಕೂಡುತ
ನಂದನ ಮನ್ನಿಸಬೇಕು || ೧೩೦ ||

ಹೊಲೆಯ ನಂದನ ನೀವು ನಲವಿಂದ ಮನ್ನಿಸಿ
ಒಲವಿನಿಂದಗ್ನಿ ಕುಂಡದಲಿ
ನಲಿದು ನೀವೆಲ್ಲರು ಪೂತನಮಾಡಿರಿ
ಸಲುವನು ವಿಪ್ರಗುಂಪಿನಲಿ || ೧೩೧ ||

ಈಪರಿಯಿಂದಲೆ ತಾಪವರ್ಜಿತ ಪೇಳಿ
ರೂಪುತೋರದೆ ಮಾಯವಾಗೆ
ಆ ಪರಮೇಶನ ಮಹಿಮೆಯ ನೋಡಲು
ಭಾಸ್ಕರ ನುದಿಸಿದನಾಗ || ೧೩೨ ||

ಕೋಗಿಲೆ ಕೂಗಲು ಆಗ ವಿಪ್ರರು ಎದ್ದು
ಬೇಗದಿ ಸ್ನಾನವಮಾಡಿ
ತೂಗುವ ರುದ್ರಾಕ್ಷಿ ಭಸ್ಮ ಶೋಭಿಸುತಿರೆ
ಸಾರಿಬಂದರು ಶಿವನೆಡೆಗೆ || ೧೩೩ ||

ಕೂಡಿದರೆಲ್ಲರು ಗಾಢದಿ ವಿಪ್ರರು
ಮಾಡಿದರೊಂದು ಮೇಳನವ
ರೂಢಿಯೊಳಗೆ ಇದು ಹೊಸದು ಎಂದೆನುತಾಲೆ
ಆಡಿದರಚ್ಚರಿಯಿಂದ || ೧೩೪ ||

ವಿಪ್ರರೊಳಗೆ ಶ್ರೇಷ್ಠ ಅಪ್ಪಯ್ಯ ದೀಕ್ಷಿತರು
ತಪ್ಪದೆ ಇರುಳು ಸ್ವಪ್ನದಲಿ
ಒಪ್ಪುವೊ ನಟರಾಜ ಕಾಣಿಸಿ ಮಾಡಿದ
ಅಪ್ಪಣೆ ಎನುತ ಹೇಳಿದರು || ೧೩೫ ||

ಒಂದಾಗಿ ನೀವೆಲ್ಲ ಸಂಧಿಸಿ ನಂದನ
ಚಂದದಿಂದಗ್ನಿ ಕುಂಡದಲಿ
ಹೊಂದಿಸಿ ಶುದ್ಧನ ಮಾಡಿರೆಂದೆನುತಾಲೆ
ನಿಂದು ನುಡಿದು ಮಾಯವಾದ || ೧೩೬ ||

ಈ ರೀತಿಯಿಂದಲೆ ಪೇಳಿ ಕುಳ್ಳಿರಲಾಗ
ಸೇರಿದ ಮುಖ್ಯರು ಎದ್ದು
ಕಾರಿರುಳಲಿ ನಮಗೆ ತೋರಿತು ಸ್ವಪ್ನದಿ
ಮಾರಹರನ ದಿವ್ಯಮೂರ್ತಿ || ೧೩೭ ||

ಬಂದು ಶಂಕರ ನಮಗೆ ಒಂದೆ ರಾತ್ರಿಯಲ್ಲಿ
ನಿಂದು ಅಪ್ಪಣೆಯ ಮಾಡಿದನು
ಎಂದೆಲ್ಲ ವಿಪ್ರರು ನುಡಿದು ಸಂತಸದಿಂದ
ನಿಂದರು ಮೌನಭಾವದಲಿ || ೧೩೮ ||

ಸೇರಿದವರು ಎಲ್ಲ ನೂರು ಯೋಚನೆಮಾಡಿ
ತೋರಿದ ಮಾತನಾಡಿದರು
ಮಾರಹರನ ಆಜ್ಞೆ ಮೀರಲಾಗದುಯೆಂದು
ಸಾರಿದರೇಕ ಕಂಠದಲಿ || ೧೩೯ ||

ಆಸಮಯದಿ ನಂದ ಆಶೆಯೆಲ್ಲವಬಿಟ್ಟು
ಲೇಸಾದ ಭಕ್ತಿಯಪ್ಪೊಂದಿ
ಲೇಶವು ಕುಂದಿಲ್ಲ ದಾನಂದದಿಂದಲೆ
ದೋಷದೂರನ್ನ ಪಾಡಿದನು || ೧೪೦ ||

ದೀಕ್ಷಿತರೆಲ್ಲರು ಈಕ್ಷಿಸಿ ನಂದನ
ಮೋಕ್ಷಭಾಗಿಯು ಇವನೆನುತಾ
ಆ ಕ್ಷಣದಲಿ ಶಿರಬಾಗಿ ವಂದಿಸುತ ಫಾ
ಲಾಕ್ಷನ ನುಡಿಯ ಪೇಳಿದರು || ೧೪೧ ||

ಆ ಊರತೆಂಕಣ ಭಾಗದಿ ರಚಿಸಿದ
ಪಾವಕ ಕುಂಡದ ಬಳಿಗೆ
ಭಾವುಕನನುಕೂಡಿ ಬೇಗ ಸಂಭ್ರಮದಿಂದ
ಸಾರಿದರಾ ದ್ವಿಜವರರು || ೧೪೨ ||

ಉರಿವೊ ಬೆಂಕಿಯ ನೋಡಿ ಪರಮ ಸಂತಸದಿಂದ
ಪುರಹರ ಶಂಕರ ಎನುತ
ಭರದಿ ಪ್ರದಕ್ಷಿಣೆ ವಿರಚಿಸಿ ಮೂರನು
ತ್ವರಿತದಿಂದಲೆ ನಡೆತಂದ || ೧೪೩ ||

ನಾಶರಹಿತ ಪರಮೇಶನ ದಯದಿಂದ
ವಾಸನೆಯಳಿದು ಸಂತಸದಿ
ಲೇಸಾಗಿ ಹರನ ಸಾಮೀಪ್ಯದಿ ಸೇರುತ
ಶಾಶ್ವತ ಪದವಿಯ ಪೊಂದು || ೧೪೪ ||

ಹಿಂದು ಮುಂದಿರುವಂಥ ದ್ವಂದ್ವಗಳೆಲ್ಲವ
ಖಂಡಿಸಿ ಕಾಯಬೇಕೆನುತ
ಸಂದೇಹವಿಲ್ಲದೆ ಒಂದೆ ಮನದಲಿ
ಬಂದಗ್ನಿ ಕುಂಡಕೆ ಬಿದ್ದ || ೧೪೫ ||

ಅಗ್ನಿಕುಂಡದಿಯಿರ್ಪ ಯಜ್ಞಪುರುಷನಂತೆ
ಆಜ್ಞೆಯ ಹೊಂದಿ ಶಂಕರನ
ಭಗ್ನವಾಗಲು ಭವ ಪ್ರಜ್ವಲಿಸಿದನಾಗ
ಯೋಗ್ಯನೆಂದೆನುತ ಪಾಡಿದರು || ೧೪೬ ||

ಸ್ವಚ್ಛಭಂಗಾರವಯಿಟ್ಟರೆ ಪುಟದೊಳು
ಹೆಚ್ಚಿತೋರುವ ಕಾಂತಿಯಂತೆ
ಹೆಚ್ಚಿನತೇಜದಿ ಒಪ್ಪಿಯಿರಲು ನಂದ
ಅಚ್ಚರಿಯಾದರು ಜನರು || ೧೪೭ ||

ನಂದನ ಒಡಗೊಂಡು ಬಂದರು ವಿಪ್ರರು
ಅಂದು ಗೋಪುರವ ಸಾರಿದರು
ಚಂದದಿ ಶ್ರೀಸುಬ್ರಹ್ಮಣ್ಯನ ಪಕ್ಕದಿ
ಬಂದು ಕಂಡರು ಸರೋವರವ || ೧೪೮ ||

ದೇವಸಭೆಯ ಮನೆದಾಟಿ ವಂದಿಸಿದರು
ಸ್ವಾಮಿ ಗೋವಿಂದರಾಜನಿಗೆ
ಬೇಗದಿ ತಾಂಡವ ನಿರುವ ಮಂದಿರದ
ಮುಂಭಾಗಕೆ ನಡೆತಂದರವರು || ೧೪೯ ||

ಕಡುಹರುಷದಿ ನಂದ ಒಡಲನು ಮರೆತಾನು
ಪಡೆದೆನು ಮನದಿಷ್ಟವೆನುತಾ
ತಡೆಯಿಲ್ಲದಾನಂದ ಕಡಲೊಳು ಮುಳುಗುತ
ಮೃಡನ ಕೀರ್ತನೆಯ ಪಾಡಿದನು ॥ ೧೫೦ ॥

ಕಾನನದೊಳಗಿಹ ಆ ನವಕುಸುಮವ
ತಾನರಿಯುವ ದುಂಬಿಯಂತೆ
ತಾನೆ ತನ್ನೊಳು ತಿಳಿದು ಪರಶಿವಮೂರ್ತಿಯ
ಆನಂದಭರಿತ ತಾನಾದ ॥ ೧೫೧ ॥

ನೆನೆದಮಾತ್ರದಿ ತನ್ನ ಭವವ ದಾಟಿಸುವಂಥ
ಚಿನುಮಯಾತ್ಮಕನ ನೋಡಿದನು
ಎನಗಿದು ಕೈಲಾಸ ಎನುತ ಸಂತಸದಿಂದ
ತನುವ ನೀಡಿದ ಧರೆಮೇಲೆ ॥ ೧೫೨ ॥

ಅಡಿಗಡಿಗೆರಗುತ್ತ ಬಿಡದೆ ಕೊಂಡಾಡುತ್ತ
ಕಡುಹರುಷದಿ ನಂದನಿರಲು
ತಡೆಯದೆ ಹೊಕ್ಕರು ಒಡನೆ ಗರ್ಭಾಂಗಣ
ಗುಡಿಯ ವಿಪ್ರರು ಮುದದಿಂದ ॥ ೧೫೩ ॥

ಷೋಡಶಪೂಜೆಯ ನಾಗಮಾಡುತ್ತಲೆ
ಮಾಡಿ ನೈವೇದ್ಯವ ಮುದದಿ
ಗಾಢದಿಂದಲೆ ಮಂಗಳಾರತಿ ಎತ್ತುತ
ಮಾಡಿದರಾಗ ಸ್ತೋತ್ರವನು ॥ ೧೫೪ ॥

ತಂದುಕೊಟ್ಟರು ಬೇಗ ತೀರ್ಥಪ್ರಸಾದವ
ಮಂಗಳಾರತಿಯ ನೀಡಿದರು
ಕಂಗಳ ಮುಚ್ಚದೆ ನೋಡುತಲಿರಲಾಗ
ಒಂದು ಅದ್ಭುತ ಜರುಗಿದುದು ॥ ೧೫೫ ॥

ಬಿಲ್ಲಿನಿಂದಲೆ ಬಿಟ್ಟ ಅಂಬಿನ ವೇಗದಿ
ಬಂದು ಹೊಕ್ಕನು ನಂದ ಗುಡಿಯ
ಅಂದಾಗ ತನ್ನಿಷ್ಟದೈವ ತಾಂಡವನನು
ಚಂದದಿಂದಾ ಲಂಗಿಸಿದನು || ೧೫೬ ||

ನೆರದಿದ್ದ ಜನರೆಲ್ಲ ತಿರುಗಿ ನೋಡಿದರಾಗ
ಅರಿಯಾದೆ ನಂದನಯಿರವ
ಅರಸಿ ನೋಡಿದರಾಗ ಕುರುಹು ಕಾಣದೆ ಹೋಗೆ
ಬೆರಗಾಗಿ ನಿಂದು ನೋಡಿದರು || ೧೫೭ ||

ಸಾಗರದಲಿ ಬಿದ್ದ ನೀರಿನಂದದಿ ನಂದ
ಸೇರಿದ ತಾಂಡವನೊಳಗೆ
ಆರರಿವರು ಭಕ್ತಪಾರವಶ್ಯವ ನೀಗ
ತೋರುವ ದದ್ಭುತವೆನಿಸಿ || ೧೫೮ ||

ಅಪ್ಪಯ್ಯದೀಕ್ಷಿತರು ಬೆಪ್ಪಾಗಿ ನೋಡಿದರು
ಅಪ್ಪಿದ ನಂದ ತಾಂಡವನ
ಒಪ್ಪಿಸಿಕೊಂಡನು ನಟ ತನ್ನ ಭಕ್ತನ
ತಪ್ಪನೆಣಿಸ ಬೇಡಿರೆಂದ || ೧೫೯ ||

ಹೊಂದಿನಿಂದನು ನಂದ ಇಂದು ತಾಂಡವನೊಳು
ಸಂದೇಹಬೇಡ ಯೆಂದೆನುತಾ
ನಂದನ ಚರಿತ್ರೆಯನಿಂದು ಕೊಂಡಾಡುತ
ಬಂದರು ತಮ್ಮನೆಗಳಿಗೆ || ೧೬೦ ||

ಅಂಬರಲಿಂಗ ಚಿದಂಬರ ದೀಶನು
ಕಂಗೊಳಿಸುವ ಜ್ಯೋತಿಯಂತೆ
ಮಂಗಳ ಮೂರ್ತಿಯ ಪಾಡಲು ಭವತಾಪ
ಹಿಂಗೋದು ನಿಮಿಷ ಮಾತ್ರದಲಿ || ೧೬೧ ||

ಧರೆಯೊಳು ಕೈಲಾಸ ವರಚಿದಂಬರಕ್ಷೇತ್ರ
ಮೆರೆವೋದು ಪಾವನವೆನಿಸಿ
ಸುರುಚಿರ ಆಕಾಶಲಿಂಗದ ಪರಿಯದು
ನರರಿಗ ಗೋಚರವಹುದು || ೧೬೨ ||

ಪರಿಪೂರ್ಣ ಪರಮಾತ್ಮ ಪರಮ ಪ್ರಕಾಶನು
ಮೆರೆವೋನು ಜ್ಯೋತಿಯಂದದಲಿ
ಉರುತರ ಮಹಿಮೆಯ ನಿರುತವು ಪಾಡಲು
ದುರಿತರಾಶಿಗಳ ನೋಡಿಪುದು || ೧೬೩ ||

ಮೂರುಸಂಜೆಯಲ್ಲಿ ನೀರೆ ಪಾರ್ವತಿಯನು
ಏರಿಸಿ ಸಿಂಹಪೀಠದಲಿ
ಭಾರತಿ ವೀಣೆಯ ನುಡಿಸುತಲಿರಲಾಗ
ವಾರಿಜಾಸನ ತಾಳಬಡಿಯೆ || ೧೬೪ ||

ಇಂದಿರೆ ಗಾನವ ಚಂದದಿ ಪಾಡಲು
ಗೋವಿಂದ ಮೃದಂಗ ಬಾರಿಸಲು
ಅಂದಾಗ ಸುರರೆಲ್ಲ ನಿಂದು ಕೊಂಡಾಡಲು
ಚಂದದಿ ತಾಂಡವನೆನಿಸಿ || ೧೬೫ ||

ವಿರಚಿಸಿ ನಾಟ್ಯವ ಪರಮಸಂತಸದಿಂದ
ಸುರಮುನಿಗಳನೆಲ್ಲ ಸಲಹಿ
ಧರೆಯೊಳು ನಾಟ್ಯವ ಸ್ಮರಿಸುವ ಮನುಜರ
ಮೆರೆವೊ ತಾಂಡವ ಕಾಯೋ ದಯದಿ || ೧೬೬ ||

ಚಂದ್ರಶೇಖರಕಥೆ ಸಂಜೇಲಿ ಪೊಗಳಲು
ಮಾಂಗಲ್ಯ ಭಾಗ್ಯವ ಕೊಡುವ
ಅಂಗನೆಯರಿಗಿಷ್ಟ ಸಿದ್ಧಿಯನೀಯುವ
ಬಂದ ಗಂಡಗಳ ಕಾಯುವನು || ೧೬೭ ||

ಹರನಚರಿತ್ರೆಯ ಅರೆನಿಮಿಷವು ಪೇಳೆ
ದುರಿತರಾಶಿಗಳ ಸಂಹರಿಸಿ
ಸಿರಿಯು ಸಂತೋಷವ ಕರುಣಾದಿ ನೀಡುವ
ಗಿರಿಸುತೆ ಅರಸು ಸಂತಸದಿ || ೧೬೮ ||

ಕಾಲಕಾಲನಕಥೆ ಲೀಲೆಯ ಸ್ಮರಿಸಲು
ಮೇಲಾದ ಆರೋಗ್ಯ ಕೊಡುವ
ಬಾಲರು ಪಾಡಲು ಭಕ್ತಿಯಿಂದಲೆ ಶಿವ
ಬೇಡಿದಿಷ್ಟಾರ್ಥ ನೀಡುವನು || ೧೬೯ ||

ಆಶೆಯೆಲ್ಲವ ಬಿಟ್ಟು ಲೇಸಾಗಿ ಪಾಡಲು
ವಾಸವು ಕೈಲಾಸದೊಳಗೆ
ಬೇಸರಿಲ್ಲದೆ ಜಗದೀಶನ ಪಾಡಲು
ಶಾಶ್ವತ ಪದವಿಯ ಕೊಡುವ || ೧೭೦ ||

ಅಜಶಿರವಳಿದನೆ ಗಜಮುಖತಾತನೆ
ತ್ರಿಜಗವಂದಿತನೆ ತ್ರಿನೇತ್ರ
ತ್ರಿಗುಣವ ತೋರುತ ತ್ರಿಕಾಲದಿ ಮೆರೆಯುವ
ತ್ರಿಗುಣಾತೀತನೆ ಕಾಯೋ ದಯದಿ || ೧೭೧ ||

ವಲ್ಲಭೆಯನು ಕೂಡಿ ಭಿಲ್ಲನಂದದಿ ಬಂದು
ಅಲ್ಲಿ ಧನಂಜಯಗೊಲಿದು
ಮೆಲ್ಲನೆ ಪಾಶುಪತಾಸ್ತ್ರವ ನೊಲಿದಿತ್ತ
ಚೆಲ್ವೆಪಾರ್ವತಿ ಮನೋಹರನೆ || ೧೭೨ ||

ಸಂಜೆಯಕಾಲದಿ ಒಂದು ದೀಪವ ಶಿವ
ಗೊಂದಿಸಿ ಹಚ್ಚಿಡಲಾಗ
ಬೆಂದುಹೋಹುದು ಭವ ಸಂದೇಹವಿಲ್ಲದೆ
ಬಂದಿತು ಬೇಡಿದಿಷ್ಟಾರ್ಥ || ೧೭೩ ||

ಧಾರುಣಿಯೊಳಗೆಲ್ಲ ಸಾರಿ ಶೋಭಿಸುತಿಹ
ಮಾರಿದ ಕಪಿಲ ತೀರದಲಿ
ಸಾರಿದ ಭಕ್ತರ ಕಾರುಣ್ಯದಲಿ ಕಾಯ್ವ
ವಾರಿಜಾಸನ ಹರಿವಂದ್ಯ || ೧೭೪ ||

ತಪ್ಪುನೆಪ್ಪುಗಳೆಲ್ಲ ಒಪ್ಪಿತು ನಿಮ್ಮಡಿಗೆ
ಸರ್ಪಭೂಷಣ ಕರುಣಾಳು
ತಪ್ಪುಮಾತಾಡುವ ಶಿಶುವ ಮುದ್ದಿಸುವಂತೆ
ಮುಪ್ಪುರಾಂತಕ ಸಲಹೈಯ್ಯ || ೧೭೫ ||

ಮಣ್ಣಿನ ಹರವಿಯೊಳು ಮುನ್ನ ಹಾಲಿರಲಾಗ
ಮನ್ನಣೆ ಗೈವಂತೆ ಮುದದಿ
ಮುನ್ನ ಬರಹದೊಳಗಿರುವ ತಪ್ಪುಗಳನು
ಮನ್ನಿಸಿ ಕಥೆಯ ಕೇಳುವುದು || ೧೭೬ ||

ಧರೆಯೊಳು ರಾಜಿಪ ಗರಪುರದೀಶನು
ಅರುಹಿದಂದದಿ ಎನ್ನಮತಿಗೆ
ವಿರಚಿಸಿದೆನು ಇದ ಕರಕರೆಗೊಳ್ಳದೆ
ಹಿರಿಯರು ಮನ್ನಿಸಬೇಕು || ೧೭೭ ||

ಮಂಗಳ ಪುರಹರ ಮಂಗಳ ಶಂಕರ
ಮಂಗಳ ಗಿರಿಸುತೆ ರಮಣ
ಮಂಗಳ ಮಾರನಗೆಲಿದ ಮೋಹನಕಾರ
ಮಂಗಳ ಗಂಗೆಯ ಅರಸ || ೧೭೮ ||

ನಂದಿವಾಹನ ಜಯ ಚಂದ್ರಚೂಡನೆ ಜಯ
ಅಂಗಜ ವೈರಿಯೆ ಜಯತು
ಕಂಗೊಳಿಸುವ ಭಸ್ಮರುದ್ರಾಕ್ಷಿಯ ಧರಿಸಿದ
ಕೆಂಜಡೆ ಜೋಗಿಯೆ ಜಯತು || ೧೭೯ ||

ನೀರೆ ಪಾರ್ವತಿಸಹೆ ಸಾರಿ ಸಂತಸದಿಂದ
ತೋರುತ ತನ್ನ ಲೀಲೆಗಳ
ಸೇರಿದ ಭಕ್ತರ ಆರೈದು ಸಲಹುವ
ಶ್ರೀ ನಗರೇಶ ನಂಜುಂಡ || ೧೮೦ ||



# ಶುದ್ಧಾಶುದ್ಧ ಪತ್ರಿಕೆ

——:——

| ಪುಟ | ಪಂಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| ೪ | ೬ | ಭಂಗಾರಗಳೆಲ್ಲ | ಭಂಗಾರಗಳಲ್ಲ |
| ೧೦ | ೧೫ | ಚೆಲ್ವೆsಪಾರ್ವತಿ | ಚೆಲ್ವೆ ಪಾರ್ವತಿ |
| ೧೪ | ೧ | ಹಿಗದೆ | ಹಿಗ್ಗದೆ |
| ,, | ,, | ಸುಖ್ಗದಲ್ಲಿ | ಸುಖದಲ್ಲಿ |
| ೨೨ | ೭ | ಪ್ರದಕ್ಷಣೆ | ಪ್ರದಕ್ಷಿಣೆ |

